ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಗುರುವಾರ, ದಿನಾಂಕ: 4ನೇ ಫೆಬ್ರುವರಿ, 2021

ಉಡುಪಿ ಪವರ್ ಕಾರ್ಪೋರೇಷನ್ ಲಿಮಿಟೆಡ್ ಸಂಸ್ಥೆಯಿಂದ ವಿದ್ಯುತ್ ಖರೀದಿ ಕುರಿತು

ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) -

74(440) ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಅದಾನಿ ಸಂಸ್ಥೆಯ ಒಡೆತನದ ಉಡುಪಿ ಪವರ್ ಕಾರ್ಪೋರೇಷನ್ ಲಿಮಿಟೆಡ್ ಅಡಿಯಲ್ಲಿ ಈ ಹಿಂದೆ ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ಮೂಲಕ ವಿದ್ಯುತ್ ಖರೀದಿಯ ಒಪ್ಪಂದದ ಅನ್ವಯ 26.05.2005 ರಿಂದ ಮಾರ್ಚ್ ಮಾಹೆ 2020 ರವರೆಗೆ ಪ್ರತಿ ವಿದ್ಯುತ್ ಯುನಿಟ್‌ಗೆ ದರ ರೂ.1.45/- (Fixed Rate) ನಿಗದಿಯಾಗಿದ್ದು, ಪ್ರಸ್ತುತ ಏಪ್ರಿಲ್ 2020 ರಿಂದ ಪ್ರತಿ ಯುನಿಟ್‌ಗೆ ಕನಿಷ್ಟ ದರ ರೂ.2.91/- ರಿಂದ ಗರಿಷ್ಟ ದರ ರೂ.3.72/- ವರೆಗೆ ಖರೀದಿಸುವ ಮೂಲಕ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸುಮಾರು ರೂ.1600 ಕೋಟಿ ರೂಪಾಯಿಗಳ ನಷ್ಟ ಉಂಟಾಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು ; (ವಿವರ ನೀಡುವುದು)

(ಇ) ಸದರಿ ದುಂದು ವೆಚ್ಚದ ಖರೀದಿಯಿಂದ ಖಾಸಗಿಯವರೆಗೆ ಲಾಭವಾಗುತ್ತಿದ್ದು, ಸರ್ಕಾರದ ಬೊಕ್ಕಸಕ್ಕೆ ಹಾಗೂ ಸಾರ್ವಜನಿಕರ ವಿಶ್ವಾಸಕ್ಕೆ ದಕ್ಕೆಯಾಗುವ ಕುರಿತು ಸರ್ಕಾರದ ಚಿಂತನೆ ಏನು ; (ವಿವರ ನೀಡುವುದು)

(ಈ) ಅದಾನಿ ಸಂಸ್ಥೆ ಮತ್ತು ರಾಜ್ಯ ಸರ್ಕಾರದ ನಡುವೆ ಏರ್ಪಟ್ಟ ಒಡಂಬಡಿಕೆಗೆ ರಾಜ್ಯ ಸರ್ಕಾರದ ಯಾವ ಯಾವ ಇಲಾಖೆಗಳಿಂದ ಒಪ್ಪಿಗೆಯನ್ನು ಪಡೆಯಲಾಗಿದೆ ? (ಪೂರ್ಣ ಮಾಹಿತಿಯನ್ನು ದಾಖಲೆ ಸಮೇತ ನೀಡುವುದು)